KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಆಗಸ್ಟ್ ೭, ೨೦೦೮ (ಶ್ರಾವಣ ೧೬, ಶಕ ವರ್ಷ ೧೯೩೦) | ಸಂಚಿಕೆ ೩೨ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ತೋಟಗಾರಿಕೆ ಇಲಾಖೆ**

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯ ವಲಯ) ತುಮಕೂರು**

**ಸಂಖ್ಯೆ: ಹಿಸತೋನಿ:ರಾವ:ತು:ತಾಸ/11/08–09, ದಿನಾಂಕ: 9ನೇ ಜುಲೈ 2008**

**:ಸಪೋಟ ಮತ್ತು ಸೀಬೆ ಫಸಲುಗಳ ವಿಲೇವಾರಿಗೆ ಟೆಂಡರ್ ಯಾ ಬಹಿರಂಗ ಹರಾಜು ಪ್ರಕಟಣೆ:**

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ತುಮಕೂರು ರವರ ವ್ಯಾಪ್ತಿಯಲ್ಲಿರುವ ಕೆಳಕಂಡ ಕ್ಷೇತ್ರಗಳ ಸಪೋಟ ಮತ್ತು ಸೀಬೆ ಫಸಲುಗಳನ್ನು 2008–09ನೇ ಸಾಲಿನ ಎರಡನೇ ಅವಧಿಗೆ ವಿಲೇವಾರಿ ಮಾಡಲು ಇಲಾಖೆಯ ಪರಿಷ್ಕೃತ ನಿಯಮಾವಳಿಗಳ ಪ್ರಕಾರ ಟೆಂಡರ್ – ಯಾ – ಬಹಿರಂಗ ಹರಾಜು ಪ್ರಕಟಣೆ ಹೊರಡಿಸಿದೆ. ಟೆಂಡರ್ ಕಂ ಬಹಿರಂಗ ಹರಾಜು ಪ್ರಕ್ರಿಯೆಯನ್ನು ಕೆಳಗಿನಂತೆ ತಿಳಿಸಿರುವ ದಿನಾಂಕ ಮತ್ತು ವೇಳೆಯಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ತುಮಕೂರು ರವರ ಅಧೀನದ ಸಂಬಂಧಪಟ್ಟ ತೋಟಗಾರಿಕೆ ಕ್ಷೇತ್ರಗಳಲ್ಲಿ ನಡೆಸಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ವ್ಯಾಪಾರಸ್ಥರು ಕ್ಷೇತ್ರದಲ್ಲಿ ಫಸಲನ್ನು ವೀಕ್ಷಿಸಿ ನಂತರ ಸದರಿ ಪ್ರಕ್ರಿಯೆಯಲ್ಲಿ ಭಾಗವಹಿಸಲು ಕೋರಲಾಗಿದೆ.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ | ಫಸಲಿನ ಹೆಸರು | ಫಸಲನ್ನು ರೂಡಿಸಿಕೊಳ್ಳಲು ಕೊನೆಯ ದಿನಾಂಕ | ಠೇವಣಿ ಮೊತ್ತ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ (ಸಂಜೆ 5.00 ಗಂಟೆ ಒಳಗೆ) | ಟೆಂಡರ್ ಯಾ ಹರಾಜು ದಿನಾಂಕ ಮತ್ತು ವೇಳೆ |
|---|---|---|---|---|---|---|
| 1 | ರಂಗಸ್ವಾಮಿಗುಡ್ಡ ತೋ.ಕ್ಷೇತ್ರ | ಸೀಬೆ | 31.12.08 | 2000 | 30.7.2008 | 31.7.2008 ಬೆಳಿಗ್ಗೆ 11.00 ಗಂಟೆಗೆ |
| | | ಸಪೋಟ | 31.12.08 | 2000 | 23.8.2008 | 25.8.2008 ಬೆಳಿಗ್ಗೆ 11.00 ಗಂಟೆಗೆ |
| 2. | ಮಾರ್ಕೊನಹಳ್ಳಿ ತೋ.ಕ್ಷೇತ್ರ | ಸೀಬೆ | 31.12.08 | 2000 | 30.7.2008 | 31.7.2008 ಮಧ್ಯಾಹ್ನ 2.30 ಗಂಟೆಗೆ |
| | | ಸಪೋಟ | 31.12.08 | 2000 | 23.8.2008 | 25.8.2008 ಮಧ್ಯಾಹ್ನ 2.30 ಗಂಟೆಗೆ |
| 3. | ಬಿಳಿದೇವಾಲಯ ತೋ.ಕ್ಷೇತ್ರ | ಸೀಬೆ | 31.12.08 | 2000 | 30.7.2008 | 31.7.2008 ಮಧ್ಯಾಹ್ನ 12.30 ಗಂಟೆಗೆ |
| | | ಸಪೋಟ | 31.12.08 | 2000 | 23.8.2008 | 25.8.2008 ಮಧ್ಯಾಹ್ನ 12.30 ಗಂಟೆಗೆ |
| 4. | ಮಾದಿಹಳ್ಳಿ ತೋ.ಕ್ಷೇತ್ರ | ಸೀಬೆ | 31.12.08 | 2000 | 1.8.2008 | 2.8.2008 ಬೆಳಿಗ್ಗೆ 11.30 ಗಂಟೆಗೆ |
| | | ಸಪೋಟ | 31.12.08 | 2000 | 25.8.2008 | 26.8.2008 ಬೆಳಿಗ್ಗೆ 11.30 ಗಂಟೆಗೆ |
| 5. | ಜೆ.ಸಿ. ಪುರ ತೋ.ಕ್ಷೇತ್ರ | ಸೀಬೆ | 31.12.08 | 2000 | 1.8.2008 | 2.8.2008 ಮಧ್ಯಾಹ್ನ 3 ಗಂಟೆಗೆ |
| | | ಸಪೋಟ | 31.12.08 | 2000 | 25.8.2008 | 26.8.2008 ಮಧ್ಯಾಹ್ನ 3 ಗಂಟೆಗೆ |

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ | ಫಸಲಿನ ಹೆಸರು | ಫಸಲನ್ನು ರೂಡಿಸಿಕೊಳ್ಳಲು ಕೊನೆಯ ದಿನಾಂಕ | ಠೇವಣಿ ಮೊತ್ತ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ (ಸಂಜೆ 5.00 ಗಂಟೆ ಒಳಗೆ) | ಟೆಂಡರ್ ಯಾ ಹರಾಜು ದಿನಾಂಕ ಮತ್ತು ವೇಳೆ |
|---|---|---|---|---|---|---|
| 6. | ನಿಡುವಳಲು ತೋ.ಕ್ಷೇತ್ರ | ಸಪೋಟ | 31.12.08 | 2000 | 26.8.2008 | 27.8.2008 ಬೆಳಿಗ್ಗೆ 11 ಗಂಟೆಗೆ |
| 7. | ಹೆರೂರು | ಸಪೋಟ | 31.12.08 | 2000 | 27.8.2008 | 28.8.2008 ಬೆಳಿಗ್ಗೆ 11 ಗಂಟೆಗೆ |
| 8. | ಜಿಲ್ಲಾ ನರ್ಸರಿ ತುಮಕೂರು | ಸಪೋಟ | 31.12.08 | 2000 | 27.8.2008 | 28.8.2008 ಮಧ್ಯಾಹ್ನ 3.00 ಗಂಟೆಗೆ |
| 9. | ರಾಜವಂತಿ ತೋ.ಕ್ಷೇತ್ರ ತೋ.ಕ್ಷೇತ್ರ | ಸಪೋಟ | 31.12.08 | 2000 | 28.8.2008 | 29.8.2008 ಬೆಳಿಗ್ಗೆ 12 ಗಂಟೆಗೆ |
| 10. | ಇಂದಿರಾ ತೋ.ಕ್ಷೇತ್ರ | ಸಪೋಟ | 31.12.08 | 2000 | 29.8.2008 | 30.8.2008 ಬೆಳಿಗ್ಗೆ 11 ಗಂಟೆಗೆ |
| 11. | ಶಿರಾ ನರ್ಸರಿ | ಸಪೋಟ | 31.12.08 | 2000 | 29.8.2008 | 30.8.2008 ಮಧ್ಯಾಹ್ನ 2.30 ಗಂಟೆಗೆ |
| 12. | ಡಾ:ಎಂ.ಹೆಚ್. ಮರೀಗೌಡ ತೋ.ಕ್ಷೇತ್ರ | ಸಪೋಟ | 31.12.08 | 2000 | 30.8.2008 | 1.9.2008 ಬೆಳಿಗ್ಗೆ 11.30 ಗಂಟೆಗೆ |
| 13. | ಶ್ರೀ ಧರ್ಮವೀರ ತೋ.ಕ್ಷೇತ್ರ | ಸಪೋಟ | 31.12.08 | 2000 | 1.9.2008 | 2.9.2008 ಬೆಳಿಗ್ಗೆ 11.30 ಗಂಟೆಗೆ |

ಟೆಂಡರ್ ಫಾರಂಗಳನ್ನು ರೂ.25–00 ಪಾವತಿ ಮಾಡಿ ಈ ಕಛೇರಿ ಅಥವಾ ಆಯಾಯ ಕ್ಷೇತ್ರಗಳ ಕ್ಷೇತ್ರಾಧಿಕಾರಿಗಳ ಕಛೇರಿಯಲ್ಲಿ ಕಛೇರಿ ಸಮಯದಲ್ಲಿ ಪಡೆಯಬಹುದು. ಟೆಂಡರ್‌ದಾರರು ಆಯಾಯ ಫಸಲಿಗೆ ನಿಗದಿಪಡಿಸಿದ ಠೇವಣಿ ಮೊತ್ತ ಮತ್ತು ಫಸಲಿಗೆ ತಾವು ನಮೂದಿಸುವ ಟೆಂಡರ್ ಮೊತ್ತದ 50 ಶೇಕಡ ಭಾಗದ ಮೊತ್ತವನ್ನು ಪ್ರತ್ಯೇಕವಾಗಿ ಅಡ್ಡಗೆರೆ ಎಳೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ತುಮಕೂರು ರವರ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆ ಕಡ್ಡಾಯವಾಗಿ ಲಗತ್ತಿಸಬೇಕು. ಟೆಂಡರ್ ಫಾರಂನಲ್ಲಿ ಟೆಂಡರ್‌ದಾರರು ತಾವು ದಾಖಲಿಸುವ ಮೊತ್ತವನ್ನು ಕಡ್ಡಾಯವಾಗಿ ನಮೂದಿಸಿ ತಮ್ಮ ಹೆಸರು ವಿಳಾಸಗಳನ್ನು ಭರ್ತಿ ಮಾಡಿ ಸಹಿ ಮಾಡಿರಬೇಕು. ಇಲ್ಲದಿದ್ದಲ್ಲಿ ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಮೊಹರು ಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು ನಿಗದಿಪಡಿಸಿದ ದಿನಾಂಕ ಮತ್ತು ವೇಳೆಗೆ ಅಥವಾ ಅದಕ್ಕೂ ಮೊದಲು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ತುಮಕೂರು ರವರ ಹೆಸರಿನಲ್ಲಿ ಸಲ್ಲಿಸಬೇಕು.

ಬಹಿರಂಗ ಹರಾಜಿನಲ್ಲಿ ಬಿಡ್ಡು ಮಾಡುವವರು ಸಹ ನಿಗದಿಪಡಿಸಿದ ಠೇವಣಿ ಹಣವನ್ನು ಪ್ರತ್ಯೇಕವಾಗಿ ಡಿ.ಡಿ.ರೂಪದಲ್ಲಿ ಸಲ್ಲಿಸಿ ಬಿಡ್ಡು ಮಾಡಲು ಅರ್ಹತೆಯನ್ನು ಪಡೆಯಬೇಕು. ಟೆಂಡರ್ ಹಾಗೂ ಹರಾಜು ಮೊತ್ತಗಳಲ್ಲಿ ಅತಿ ಹೆಚ್ಚಿನ ಮೊತ್ತವಾದ ಒಂದು ಮಾತ್ರ ಪರಿಗಣಿಸಲಾಗುವುದು. ಅತೀ ಹೆಚ್ಚಿನ ಹರಾಜು ಮೊತ್ತದ ಬಿಡ್ಡುದಾರರು ಸಹ ಬಿಡ್ಡಿನ ಮೊತ್ತದ ಶೇಕಡ 50 ಭಾಗದ ಮೊತ್ತವನ್ನು ಅಲ್ಲಿಯೇ ಡಿ.ಡಿ.ರೂಪದಲ್ಲಿ ಪಾವತಿ ಮಾಡಬೇಕು.

ಮೇಲಿನ ಕ್ಷೇತ್ರಗಳ ಫಸಲನ್ನು ಟೆಂಡರ್ ಯಾ ಹರಾಜು ಅನುಮೋದನೆಯಾದ ದಿನಾಂಕದ 10 ದಿನಗಳೊಳಗಾಗಿ ಪೂರ್ಣ ಮೊಬಲಗನ್ನು ಪಾವತಿ ಮಾಡಿ ಫಸಲನ್ನು ರೂಡಿಸಿಕೊಳ್ಳಬಹುದು. ಟೆಂಡರ್ ಯಾ ಹರಾಜನ್ನು ಅನುಮೋದಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿ ವಿವರಗಳನ್ನು ನಿಬಂಧನೆ ಮತ್ತು ಷರತ್ತುಗಳನ್ನು ಈ ಕಛೇರಿಯಲ್ಲಿ ಅಥವಾ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯ ವಲಯ) ತುಮಕೂರು.

ಪಿ.ಆರ್. 405

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯವಲಯ), ಕೋಲಾರ.**

**ಸಪೋಟ ಮತ್ತು ಸೀಬೆ ಫಸಲಿನ ವಿಲೇವಾರಿಗೆ ಟೆಂಡರ್/ ಟೆಂಡರ್–ಕಂ–ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ:ಹಿಸತೋನಿ:ರಾವ:ಕೋ:ಸತೋಅ:37:2008–09, ದಿನಾಂಕ: 19ನೇ ಜುಲೈ 2008**

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಆಸಕ್ತ ಹಣ್ಣು ವ್ಯಾಪಾರಸ್ಥರಿಗೆ ತಿಳಿಯಪಡಿಸುವುದೇನೆಂದರೆ, ಈ ಕಛೇರಿ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರ/ಸಸ್ಯಾಗಾರಗಳ 2008ನೇ ಸಾಲಿನ ಎರಡನೇ ಅವಧಿಯ ದಿನಾಂಕ:1.7.2008 ರಿಂದ 31.12.2008ರ ವರೆಗಿನ ಸಪೋಟ ಮತ್ತು ಸೀಬೆ ಫಸಲಿನ ವಿಲೇವಾರಿಯನ್ನು ಪರಿಷ್ಕೃತ

ನಿಯಮಾವಳಿಗಳ ಪ್ರಕಾರ ಟೆಂಡರ್–ಕಂ–ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲಾಗುವುದು. ಟೆಂಡರ್/ಟೆಂಡರ್–ಕಂ–ಬಹಿರಂಗ ಹರಾಜನ್ನು ನಡೆಸುವ ದಿನಾಂಕ ಮತ್ತು ವೇಳೆಯನ್ನು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ.

| ಕ್ರ. ಸಂ. | ಕ್ಷೇತ್ರದ ಹೆಸರು | ಹರಾಜು ನಡೆಸುವ ವಿಧಾನ | ಫಸಲಿನ ಹೆಸರು | ಮರಗಳ ಸಂಖ್ಯೆ | ಮುಂಗಡ ಠೇವಣಿ ಮೊತ್ತ (ರೂಗಳಲ್ಲಿ) | ಟೆಂಡರ್/ಟೆಂಡರ್–ಕಂ–ಬಹಿರಂಗ ಹರಾಜು ನಡೆಸುವ ದಿನಾಂಕ:ಮತ್ತು ಸಮಯ |
|---|---|---|---|---|---|---|
| 1 | ಹೊಗಳಗೆರೆ ಕ್ಷೇತ್ರ, ಶ್ರೀನಿವಾಸಪುರ ತಾಲ್ಲೂಕು | ಟೆಂಡರ್ ಮಾತ್ರ | ಸಪೋಟ | 2335 | 5000 | ದಿನಾಂಕ:18.8.08 ಸಮಯ:3.30 ಸ್ಥಳ:ಹಿಸತೋನಿ(ರಾವ) ಕಛೇರಿ ಕೋಲಾರ. |
| 2 | ಜೋಡಿವಮ್ಮಸಂದ್ರ ತೋಟಗಾರಿಕೆ ಕ್ಷೇತ್ರ, ಮುಳಬಾಗಿಲು ತಾಲ್ಲೂಕು | ಬಹಿರಂಗ ಹರಾಜು | ಸೀಬೆ | 2900 | 1000 | ದಿನಾಂಕ:19.8.08 ಸಮಯ:12.30 ಸ್ಥಳ:ಜೋಡಿವಮ್ಮಸಂದ್ರ ಕ್ಷೇತ್ರ. |
| | ಜೋಡಿವಮ್ಮಸಂದ್ರ ತೋಟಗಾರಿಕೆ ಕ್ಷೇತ್ರ, ಮುಳಬಾಗಿಲು ತಾಲ್ಲೂಕು | ಟೆಂಡರ್ ಮಾತ್ರ | ಸಪೋಟ | 1026 | 5000 | ದಿನಾಂಕ:23.8.08 ಸಮಯ:3.30 ಸ್ಥಳ:ಹಿಸತೊನಿ(ರಾವ)ಕಛೇರಿ ಕೋಲಾರ |
| 3 | ಜಿಲ್ಲಾ ನರ್ಸರಿ, ಕೋಲಾರ | ಟೆಂಡರ್–ಕಂ–ಬಹಿರಂಗ ಹರಾಜು | ಸಪೋಟ | 13 | 500 | ದಿನಾಂಕ:25.8.08 ಸಮಯ:12.30 ಸ್ಥಳ:ಜಿಲ್ಲಾ ಸಸ್ಯಾಗಾರ ಕೋಲಾರ. |
| 4 | ದೊಡ್ಡಶಿವಾರ ಕ್ಷೇತ್ರ ಮಾಲೂರು ತಾಲ್ಲೂಕು | ಟೆಂಡರ್–ಕಂ–ಬಹಿರಂಗ ಹರಾಜು | ಸಪೋಟ | 295 | 500 | ದಿನಾಂಕ:26.8.08 ಸಮಯ:12.30 ಸ್ಥಳ:ದೊಡ್ಡಶಿವಾರ ಕ್ಷೇತ್ರ |

ಈ ಮೇಲ್ಕಂಡ ಫಸಲುಗಳ ಬಗ್ಗೆ ಟೆಂಡರ್ ಸಲ್ಲಿಸಲು ಇಚ್ಛಿಸುವವರು ನಿಗಧಿತ ಟೆಂಡರ್ ಫಾರಂನ್ನು ರೂ.25.00 (ಇಪ್ಪತ್ತೈದು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಕೋಲಾರ ರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು. (ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ) ಟೆಂಡರ್ ಫಾರಂ ಸಲ್ಲಿಸುವವರು ಠೇವಣಿ ಮೊತ್ತ ಮತ್ತು ಫಸಲಿಗೆ ತಾವು ನಮೂದಿಸಿದ ಮೊತ್ತದ ಶೇಕಡ 50ರ ಭಾಗದ ಮೊತ್ತವನ್ನು ಕ್ರಾಸ್ ಮಾಡಿದ ಡಿ.ಡಿ. ರೂಪದಲ್ಲಿ **"Sr.Asst. Director of Horticulture, (State Sector) Kolar"** ರವರ ಹೆಸರಿನಲ್ಲಿ ಪಡೆದು ಮೊಹರಾದ ಟೆಂಡರ್ ಜೊತೆಯಲ್ಲಿ ಕಡ್ಡಾಯವಾಗಿ ಲಗತ್ತಿಸಬೇಕು. ಟೆಂಡರ್ ಸಲ್ಲಿಸುವವರು ಟೆಂಡರ್ ಕವರ್ ಮೇಲೆ " ಫಸಲಿನ ಹೆಸರನ್ನು" ಸ್ಪಷ್ಟವಾಗಿ ನಮೂದಿಸಿರಬೇಕು.

ಬಹಿರಂಗ ಹರಾಜಿನಲ್ಲಿ ಬಿಡ್ ಮಾಡಿದ ಯಶಸ್ವಿ ಬಿಡ್ಡುದಾರರು ಹರಾಜಿನ ಮೊತ್ತದ ಶೇಕಡ 50ರ ಭಾಗದ ಮೊತ್ತವನ್ನು ಸ್ಥಳದಲ್ಲಿಯೇ ಪಾವತಿಸಬೇಕು. ಫಸಲಿನ ಟೆಂಡರ್–ಕಂ–ಬಹಿರಂಗ ಹರಾಜಿನಲ್ಲಿ ಬಂದ ಅತಿ ಹೆಚ್ಚು ಬಿಡ್ ಮೊತ್ತವನ್ನು ಅಂತಿಮ ಬಿಡ್ ಮೊತ್ತವೆಂದು ಪರಿಗಣಿಸಲಾಗುವುದು.

ಮೇಲಿನ ಕ್ಷೇತ್ರಗಳ ಫಸಲುಗಳ ಟೆಂಡರ್–ಕಂ–ಬಹಿರಂಗ ಹರಾಜು ಅನುಮೋದನೆಯಾದ ದಿನಾಂಕದಿಂದ 10 ದಿವಸಗಳೊಳಗಾಗಿ ಪೂರ್ಣ ಮೊತ್ತವನ್ನು ಪಾವತಿಸಿ, ಫಸಲನ್ನು ರೂಢಿಸಿಕೊಳ್ಳಬಹುದಾಗಿರುತ್ತದೆ. ಸದರಿ ಟೆಂಡರ್/ಟೆಂಡರ್–ಕಂ–ಬಹಿರಂಗ ಹರಾಜು ಪ್ರಕ್ರಿಯೆಯನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು ಖಾಯ್ದಿರಿಸಿಕೊಂಡಿರುತ್ತಾರೆ. ಟೆಂಡರ್ ಹಾಗೂ ಹರಾಜು ನಡೆಸುವ ಪ್ರಕ್ರಿಯೆಯಲ್ಲಿ ಇಲಾಖೆಯ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಟೆಂಡರ್ ಸಲ್ಲಿಸುವವರು ಟೆಂಡರನ್ನು ನಡೆಸುವ ದಿನಾಂಕದಂದು ಮಧ್ಯಾಹ್ನ 3.00 ಗಂಟೆ ಸಮಯದೊಳಗಾಗಿ ಅಥವಾ ಮುಂಚಿತವಾಗಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಕೋಲಾರ ರವರ ಕಛೇರಿಯಲ್ಲಿ ಸಲ್ಲಿಸಬೇಕು.

ಈ ಬಗ್ಗೆ ಹೆಚ್ಚಿನ ಪರಿಷ್ಕೃತ ನಿಯಮಾವಳಿಗಳ ವಿವರ, ನಿಬಂಧನೆ, ಷರತ್ತುಗಳನ್ನು ಈ ಕೆಳಸಹಿದಾರರ ಕಛೇರಿಯಲ್ಲಿ ಅಥವಾ ಸಂಬಂಧಪಟ್ಟ ಕ್ಷೇತ್ರಗಳ ಅಧಿಕಾರಿಗಳಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯ ವಲಯ) ಕೋಲಾರ

ಪಿ.ಆರ್. 410

**KARNATAKA STATE BOARD OF WAKFS**

**[Constituted by the Government of Karnataka under the Wakf Act, 1995 (CENTRAL ACT 43 OF 95)]**

**Darul Awkaf, No.6. Cunningham Road, BANGALORE**

**CORRIGENDUM**

**No. KTW/MSC/40/BJR/2006-07, Dated: 20th May 2008**

**Sub:** Correction of entries in respect of Dargah Hazrath Haji Roomi exist in land bearing CTS No.1742 of Ward No.III of Bijapur.

**Ref:** This office Public Notice of even No.dated 1.6.2007.

The Administrator, District Wakf Advisory Committee, Bijapur in its report No.DWAC/MSC/02/BJR/0607/1139 Dated 4.9.2006 has reported that the Wakf Dargah Haji Room exist in land bearing CTS.No.1742 of Ward No.III of Bijapur have been notified as Wakf vide Notification No. KTW/531/ASA/74 DATED 14.2.1974 and there are discrepancies in the above said notification and requested to issue necessary corrigendum in this behalf as proposed.

Whereas a public Notice cited under reference above was issued by this office calling objections/Suggestions if any for the said proposal within fifteen (15) days after publication of this office public Notice. Whereas, the Wakf Officer, District Wakf Advisory Committee, Bijapur vide their report No.DWAC/MSC/02/BJR/06-07/67 dated:28.6.2007, has reported that there were no objections or suggestions received in this behalf and requested this office to issue necessary corrigendum in this behalf. Hence this Corrigendum.

| **EXISTING ENTRIES** | | | | **READ THE CORRECT ENTRIES** | | | |
|---|---|---|---|---|---|---|---|
| Sl. No. | Name of The Wakf | Description of Wakf property | Name of The Muthawalli | Sl. No. | Name of the Wakf Muthawalli | Description of the Wakf property | Name of The Muthawalli |
| 338 | Haji Roomi Darga (Sunni) Bijapur | SY.No. 185 A -G<br>CTS.No.1742 00-06<br>**Measuring**<br>30946 Sq. Yards | Galam Dastagir Syed Buranuddi Bakshi | 338 | Dargah Hazrath Haji Roomi (Sunni) Bijapur | C.T.S. No. 1742<br>**Measuring:**<br>30946 Sq. Yards of ward No. III of Bijapur out of which an area of<br>North - South 70' (feet)<br>East - West 95' (feet)<br>**Bounded as under:**<br>North: Open space of CTS.No.1742.<br>South: Open space of CTS.No.1742.<br>East: Open space of CTS.No.1742.<br>West: Open space of CTS.No.1742. | Sri Syed Abdul Khader S/o Syed Gulam Dastagir Bakshi. |

This corrigendum is issued as per the powers delegated in Order N.KBW/110/ADM/05-06, DATED 2.3.2006 of Karnataka State Board of Wakfs.

Chief Executive Officer,
Karnataka State Board of Wakfs.

P.D. 75

**ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ.**

**ಶ್ರೀ.ಡಿ.ದೇವರಾಜ ಅರಸು ಬಡಾವಣೆ, "ಎ" ಬ್ಲಾಕ್, ಪಿ.ಬಿ.ರಸ್ತೆ, ದಾವಣಗೆರೆ–577006.**

**"ಟೆಂಡರ್ ಪ್ರಕಟಣೆ (ಎರಡು ಲಕೋಟೆ ಬಿಡ್ ಪದ್ಧತಿ)(ಎರಡನೇ ಕರೆ)"**

**ಸಂಖ್ಯೆ.ದಾನಪ್ರಾ:ತಾಶಾ:02:ಟೆಂಪ್ರ:01:2007-08, ದಿನಾಂಕ: 04ನೇ ಜುಲೈ 2008.**

ಆಯುಕ್ತರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ಶ್ರೀ ಡಿ.ದೇವರಾಜ್ ಅರಸು ಬಡಾವಣೆ, "ಎ" ಬ್ಲಾಕ್, ಪಿ.ಬಿ.ರಸ್ತೆ, ದಾವಣಗೆರೆ ಇವರು ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಒಂದನೇ ದರ್ಜೆ ವಿದ್ಯುತ್ ಗುತ್ತಿಗೆದಾರರುಗಳಿಂದ ಈ ಕೆಳಗೆ ನಮೂದಿಸಿರುವ ಕಾಮಗಾರಿಗೆ ಮೊಹರಾದ ಐಟಂವಾರು ಟೆಂಡರ್‌ಗಳನ್ನು ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ (ಒಂದು ಲಕೋಟೆ ತಾಂತ್ರಿಕ ಬಿಡ್ ಮತ್ತು ಎರಡನೇ ಲಕೋಟೆ ಫೈನಾನ್ಸಿಯಲ್ ಬಿಡ್ ಇರುತ್ತದೆ).

1. ಟೆಂಡರ್ ಫಾರಂಗೆ ಅರ್ಜಿ ನೀಡಲು (ನಿಗದಿತ ಇ.ಎಂ.ಡಿ ಹಾಗೂ ಟೆಂಡರ್ ಫಾರಂ ಬೆಲೆಯೊಂದಿಗೆ) ಕೊನೆಯ ದಿನಾಂಕ 05.09.2008ರ ಸಂಜೆ 4.00 ಗಂಟೆವರೆಗೆ.
2. ಖಾಲಿ ಟೆಂಡರ್ ಫಾರಂಗಳನ್ನು ವಿತರಿಸುವ ದಿನಾಂಕ : 10.09.2008ರ ಸಂಜೆ 4.00 ಗಂಟೆವರೆಗೆ.
3. ಬಿಡ್ ಪೂರ್ವ ಮಿಟಿಂಗ್ ದಿನಾಂಕ:12.09.2008ರಂದು ಬೆಳಿಗ್ಗೆ 11.00 ಗಂಟೆಗೆ ಸ್ಥಳ: ಸಹಾಯಕ ಕಾರ್ಯಪಾಲಕ ಅಭಿಯಂತರರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ ಇವರ ಕೊಠಡಿಯಲ್ಲಿ.
4. ಭರ್ತಿ ಮಾಡಿದ ಟೆಂಡರ್ ಸಲ್ಲಿಸುವ ದಿನಾಂಕ : 18.09.2008ರ ಸಂಜೆ 4.00 ಗಂಟೆವರೆಗೆ.
5. ತಾಂತ್ರಿಕ ಬಿಡ್ ತೆರೆಯುವ ದಿನಾಂಕ 18.09.2008ರ ಸಂಜೆ 4.30 ಗಂಟೆ ನಂತರ.
6. ಆರ್ಥಿಕ ಬಿಡ್ ತೆರೆಯುವ ದಿನಾಂಕ:19.09.2008 ರಂದು ಬೆಳಿಗ್ಗೆ 11.30 ಗಂಟೆ ನಂತರ.

ಟೆಂಡರ್ ಫಾರಂ ಬೆಲೆಯನ್ನು (ಹಿಂದಿರುಗಿಸುವುದಿಲ್ಲ) ಹಾಗೂ ಇ.ಎಂ.ಡಿ ಯ ಮೊತ್ತವನ್ನು ಆಯುಕ್ತರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ ಇವರಿಗೆ ಪಾವತಿಯಾಗುವಂತೆ ಯಾವುದೇ ರಾಷ್ಟ್ರೀಕೃತ ಬ್ಯಾಂಕ್ ನಿಂದ ಪಡೆದ ಡಿಮ್ಯಾಂಡ್ ಡ್ರಾಫ್ಟ್‌ನ್ನು ಅರ್ಜಿಯ ಜೊತೆಗೆ ಲಗತ್ತಿಸತಕ್ಕದ್ದು, ಮೊಹರು ಮಾಡಿದ ಟೆಂಡರುಗಳ ಲಕೋಟೆಯ ಮೇಲೆ ಕಾಮಗಾರಿಯ ಹೆಸರನ್ನು ಬರೆದಿರಬೇಕು.

ಒಂದನೇ ದರ್ಜೆಯ ಗುತ್ತಿಗೆದಾರರಿಂದ ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರದಿಂದ ರಚಿಸಿರುವ ಶ್ರೀ ಜೆ.ಹೆಚ್.ಪಟೇಲ್ ಬಡಾವಣೆಯಲ್ಲಿ ವಿದ್ಯುತ್ತಿಕರಣ ಕಾಮಗಾರಿ ನಿರ್ವಹಿಸಲು (ಗ್ರಾಮಾಂತರ ಉಪ ವಿಭಾಗ ಓ ಅಂಡ್ ಎಂ ವ್ಯಾಪ್ತಿಗೆ ಒಳಪಡುವ) ಟೆಂಡರ್ ಕರೆಯಲಾಗಿದ್ದು, ಇದಕ್ಕೆ ಇಟ್ಟಿರುವ ಟೆಂಡರ್ ಮೊತ್ತ ರೂ.2,08,06,541-00 ಗಳಾಗಿದ್ದು, ಇ.ಎಂ.ಡಿ ರೂ.2,08,065-00ಗಳು ಮತ್ತು ಟೆಂಡರ್ ಪತ್ರದ ಬೆಲೆ ರೂ.20,000 + ತೆರಿಗೆ. ಈ ಕೆಲಸವನ್ನು ಪೂರ್ಣಗೊಳಿಸುವ ಕಾಲಮಿತಿ ಮಳೆಗಾಲವು ಸೇರಿ 6 ತಿಂಗಳು.

**ಷರತ್ತುಗಳು:**

1. ಅರ್ಜಿಯೊಂದಿಗೆ ಲೈಸನ್ಸ್, ಕಾಮಗಾರಿ ನೆರವೇರಿಸಿರುವ ದೃಢೀಕರಣ ಪತ್ರ, ಆದಾಯ ತಿರುವಳಿ, ಇತರೆ ದಾಖಲೆ ಪತ್ರಗಳನ್ನು ಲಗತ್ತಿಸತಕ್ಕದ್ದು.
2. ಈ ಮೇಲಿನ ಕಾಮಗಾರಿಯ ಮೊತ್ತದ ಶೇ.90ರಷ್ಟು (ರೂ.1,87,26,000-00ಗಳು) ಮೊತ್ತಕ್ಕೆ ಕಡಿಮೆ ಇರದಂತೆ ಇದೇ ಮಾದರಿಯ ಕನಿಷ್ಠ ಒಂದು ಕಾಮಗಾರಿಯನ್ನು ಕಳೆದ ಮೂರು ವರ್ಷದ ಅವಧಿಯಲ್ಲಿ ನಿರ್ವಹಿಸಿರತಕ್ಕದ್ದು. ಕೆಲಸ ನಿರ್ವಹಿಸಿದ ಬಗ್ಗೆ ಕಾರ್ಯ ಅರ್ಹತಾ ಪ್ರಮಾಣ ಪತ್ರವನ್ನು (Work done Certificate) ಹಾಜರು ಪಡಿಸಬೇಕು. ಸದರಿ ಪ್ರಮಾಣ ಪತ್ರ ಹಾಜರುಪಡಿಸಿದಂತಹ ಗುತ್ತಿಗೆದಾರರು/ಸಂಸ್ಥೆಗಳಿಗೆ ಮಾತ್ರ ಟೆಂಡರ್ ಫಾರಂಗಳನ್ನು ನೀಡಲಾಗುವುದು.
3. ಕಳೆದ ಮೂರು ವರ್ಷಗಳ ಅವಧಿಯಲ್ಲಿ ಗುತ್ತಿಗೆದಾರರ ಆರ್ಥಿಕ ವಹಿವಾಟು ಕನಿಷ್ಟ ರೂ.4.00 ಕೋಟಿ ಇರತಕ್ಕದ್ದು. ಕೆಲಸ ನಿರ್ವಹಿಸಿದ ಬಗ್ಗೆ ಕಾರ್ಯ ಅರ್ಹತಾ ಪ್ರಮಾಣ ಪತ್ರವನ್ನು ಹಾಜರ್ ಪಡಿಸಬೇಕು.
4. ಯಾವುದೇ ಕಾರಣ ನೀಡದೆ ಅಥವಾ ಎಲ್ಲಾ ಟೆಂಡರ್‌ಗಳನ್ನು ಅಂಗೀಕರಿಸುವ/ತಿರಸ್ಕರಿಸುವ ಹಕ್ಕನ್ನು ಪ್ರಾಧಿಕಾರವು ಕಾಯ್ದಿರಿಸಿಕೊಂಡಿರುತ್ತದೆ.
5. ಮುಂದೆ ಬದಲಾಗಬಹುದಾದ ನಿಯಮಗಳಿಗೆ ಹಾಗೂ ಹೆಚ್ಚಿನ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು ಹಾಗೂ ಹೆಚ್ಚಿನ ವಿವರಗಳನ್ನು ಕೆಲಸದ ದಿನಗಳಲ್ಲಿ ಪ್ರಾಧಿಕಾರದ ಸಹಾಯಕ ಕಾರ್ಯಪಾಲಕ ಅಭಿಯಂತರರನ್ನು ಸಂಪರ್ಕಿಸಿ ಪಡೆಯಬಹುದಾಗಿದೆ.

ಆಯುಕ್ತರು,
ದಾ–ಹ ನಗರಾಭಿವೃದ್ಧಿ ಪ್ರಾಧಿಕಾರ,
ದಾವಣಗೆರೆ.

ಪಿ.ಡಿ. 77

**EDUCATION DEPARTMENT**
**Office of the Deputy Director of Public Instruction, Chikodi**
**FORM-1**
**(See Rule 9)**
**NOTIFICATION**

Shri **PARASHURAM RAMU SAMGAR,** Working as **ASSISTANT TEACHER** in Educational Department of Govt. High School, Manakapur, Tq: Chikodi, is permitted to change his name to Shri **PARASHURAM RAMU KHAIRAMODE.**

Deputy Director of Public
Instruction, Chikodi

P.D. 77

**ಶಿಕ್ಷಣ ಇಲಾಖೆ**

**ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ**

[ನಮೂನೆ–1]

[9ನೇ ನಿಯಮ ನೋಡಿ]

**ಅಧಿಸೂಚನೆ**

ಶ್ರೀ **ಬಾಲ ಮುರಳಿ ಕೃಷ್ಣ** ರವರು ಸಹ ಶಿಕ್ಷಕರಾಗಿ ಸ.ಪ್ರೌ ಶಾಲೆ ತಾಳೂರು ಸಿರುಗುಪ್ಪ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು **ಕೃಷ್ಣ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ನೇಮಕಾಧಿಕಾರಿಯವರ ಸಹಿ ಮತ್ತು
ಪದನಾಮ

ಪಿ.ಡಿ. 78

**COMMERCIAL TAXES**

**OFFICE OF THE COMMISSIONER OF COMMERCIAL TAXES, GANDHINAGAR, BANGALORE**

**[FORM-1]**

**[See Rule 9]**

**NOTIFICATION**

Shri/Smt **SUNITHA SHASHIKANTHA ULAGEKARA** Working as Stenographer in the Commercial Taxes Department of/ Office of Assistant Commissioner of Commercial Taxes, (Recovery), Karwar, Uttara Kannada District is permitted to change his/her Name to **ADITI ANIL KADAWADAKAR**

Signature and Designation of the
Appointing Authority.

P.D. 80

**JUDICIAL DEPARTMENT**

**Office of the District & Sessions Judge, Shimoga**

**[FORM-I]**

**(See Rule 9)**

**NOTIFICATION**

Smt **M. ANJALI DEVI,** Working as Typist in the Judicial Department in the Office of the District & Sessions Judge, Shimoga is permitted to change her name to **M.ANJALI**

**A.S. PATIL**
Prl.District & Sessions Judge,
Shimoga.

P.D. 81

**ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಮಾಜಿಕ ಅರಣ್ಯ (ಜಿಪ) ವಿಭಾಗ, ಬೆಳಗಾವಿ**

[ನಮೂನೆ–1]

[9ನೇ ನಿಯಮ ನೋಡಿ]

**ಅಧಿಸೂಚನೆ**

ಶ್ರೀ **ಮಲ್ಲಪ್ಪ ಹೊಳೆಪ್ಪ ನೇಸರಗಿ** ರವರು ವಲಯ ಅರಣ್ಯಾಧಿಕಾರಿ ಸಾಮಾಜಿಕ ಅರಣ್ಯ ಬೆಳಗಾವಿ ಇಲ್ಲಿ ಅರಣ್ಯ ವೀಕ್ಷಕರಾಗಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು **ಮಲ್ಲಪ್ಪ ಹೊಳೆಪ್ಪ ಚಾವಡಿ** ಎಂದು ಬದಲಾಯಿಸಿ ಕೊಳ್ಳಲು ಅನುಮತಿ ನೀಡಲಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ
ಸಾಮಾಜಿಕ ಅರಣ್ಯ (ಜಿ.ಪ) ವಿಭಾಗ, ಬೆಳಗಾವಿ
ನೇಮಕಾಧಿಕಾರಿಯವರ ಸಹಿ ಮತ್ತು ಪದನಾಮ

ಪಿ.ಡಿ. 82

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

[ನಮೂನೆ–1]

[9ನೇ ನಿಯಮ ನೋಡಿ]

**ಅಧಿಸೂಚನೆ**

ಶ್ರೀ **ಎಸ್.ಸಿ. ಸುಂದ್ರ** ರವರು, ಸರ್ಕಾರದ ಅಧೀನ ಕಾರ್ಯದರ್ಶಿಯಾಗಿ ಲೋಕೋಪಯೋಗಿ, ಬಂದರು ಒಳನಾಡು ಜಲಸಾರಿಗೆ & ಜಲಸಂಪನ್ಮೂಲ ಇಲಾಖೆ (ಕಾನೂನುಕೋಶ) ಕರ್ನಾಟಕ ಸರ್ಕಾರದ ಸಚಿವಾಲಯ ಬೆಂಗಳೂರು ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು **ಎಸ್.ಸಿ. ಸುಂದರ್** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಸರ್ಕಾರದ ಕಾರ್ಯದರ್ಶಿ
ಸಿ.ಆಸು.ಇ

ಪಿ.ಡಿ. 84

**ಆರ್ಥಿಕ ಇಲಾಖೆ**

[ನಮೂನೆ–1]

[9ನೇ ನಿಯಮ ನೋಡಿ]

**ಅಧಿಸೂಚನೆ**

ಶ್ರೀ **ಗೋವಿಂದಪ್ಪ ಬಸಯ್ಯ ವಿರಕ್ತಮಠ್** ರವರು (ಅಧಿಸೂಚನೆ ಆಇ 75 ವಾತೆಸಿ 08 ಪ್ರತಿ ಲಗತ್ತಿಸಿದೆ) ವಾಣಿಜ್ಯ ತೆರಿಗೆ ಉಪ ಆಯುಕ್ತರಾಗಿ ವಾಣಿಜ್ಯ ತೆರಿಗೆ ಇಲಾಖೆ, ಪರಿಶೋಧನೆ–3, ಹುಬ್ಬಳ್ಳಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು **ಗೋವಿಂದಪ್ಪ ಬಸಪ್ಪ ಗೌಡಪ್ಪಗೋಳ್** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಪೀಠಾಧಿಕಾರಿ
ಪಿ.ಡಿ. 89 ಆರ್ಥಿಕ ಇಲಾಖೆ (ವಾ.ತೆ. ॥)
ಕರ್ನಾಟಕ ಸರ್ಕಾರ

**Chairman, Board of Management**

**M.V.Peetha, Haunsbhavi**

**FORM-1**

**(See Rule 9)**

**NOTIFICATION**

Shri **J.F. HARIJAN** Working as **ASSISTANT TEACHER** in the **EDUCATION** Department of Office of **N.M.D. Girls High School Haunsbhavi** is permitted to change his Name to **J.F. SOMASAGAR**

Chairman,
P.D. 90 Board of Management
M.V.Peetha, Haunsbhavi

**PUBLIC INSTRUCTION DEPARTMENT**

**Office of the Deputy Director (Admn)**

**Department of Public Instruction Haveri District**

**FORM-1**

**(See Rule-9)**

**Notification**

Sri **Gousmodin. Tajusab. Mullanavar** Working as **Head Master** in the **Education Department** of / Office of **G.H.P S Chinnikatti** is permitted to change his Name to **Gousmodin.T.Mulla**

D.D.P.I.
P.D. 91 Haveri

**ಶಿಕ್ಷಣ ಇಲಾಖೆ**

**ಉಪ ನಿರ್ದೇಶಕರ ಕಛೇರಿ ಸಾ.ಶಿ. ಇಲಾಖೆ ಉತ್ತರ ಕನ್ನಡ ಕಾರವಾರ**

[ನಮೂನೆ–1]

[9ನೇ ನಿಯಮ ನೋಡಿ]

**ಅಧಿಸೂಚನೆ**

ಶ್ರೀಮತಿ **ರಾಮಯ್ಯ** ರವರು ಕಿ.ಪ್ರಾ.ಶಾಲೆ ಕುಳಗಿ ತಾ॥ ಹಳಿಯಾಳ ಇಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕಿಯಾಗಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು **ಆಶಾ.ಜಿ. ಅಣ್ಣಪ್ಪ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಉಪನಿರ್ದೇಶಕರು (ಆಡಳಿತ)
ಪಿ.ಡಿ. 93 ಸಾರ್ವಜನಿಕ ಶಿಕ್ಷಣ ಇಲಾಖೆ ಉತ್ತರ ಕನ್ನಡ
ಕಾರವಾರ

**FORM - IV**

**(See Rule 12)**

**NOTICE**

It is hereby notified that the undersigned has changed his/her name from **TAKAN GOUDA. I. MAJI** to **TAKANGOUDA. ISHWARGOUDA. MAJIGOUDRA.**

P.D. 94 **TAKAN GOUDA. I. MAJI**

**FORM - IV**

**(See Rule 12)**

**NOTICE**

It is hereby notified that the undersigned has changed his/her name from **MARITIMMAPPA BHEEMAPPA WADDAR Head Constable Bendigeri P.S. Hubli** to **MARITIMMAPPA BHEEMAPPA DODDAMANI Head Constable Bendigeri P.S. Hubli.**

P.D. 95 **MARITIMMAPPA BHEEMAPPA WADDAR Head Constable Bendigeri P.S. Hubli**

**FORM - IV**
**(See Rule 12)**
**NOTICE**

It is hereby notified that the undersigned has changed his/her name from **RANGANAYAKI. R** to **RANGANAYAKI. N.**

P.D. 96 **RANGANAYAKI. R**

**ಶಿಕ್ಷಣ ಇಲಾಖೆ**
**ಉಪ ನಿರ್ದೇಶಕರು, ಸಾ.ಶಿ. ಇಲಾಖೆ ಧಾರವಾಡ**
[ನಮೂನೆ–1]
[9ನೇ ನಿಯಮ ನೋಡಿ]
**ಅಧಿಸೂಚನೆ**

ಶ್ರೀ **ಹೊಸೂರಪ್ಪ ಭರಮಪ್ಪ ಹುಚ್ಚೊಡ್ರ** ರವರು ಶ್ರೀ ಮಾರುತಿ ಪ್ರೌಢಶಾಲೆ ಶಿರಕೋಳ ತಾ: ನವಲಗುಂದ ಜಿಲ್ಲಾ ಧಾರವಾಡ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು **ಹೊಸೂರಪ್ಪ ಭರಮಪ್ಪ ಹೊಸಮನಿ** ಎಂದು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಉಪ ನಿರ್ದೇಶಕರು,
ಪಿ.ಡಿ. 97 ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ.

**FORM - IV**
**(See Rule 12)**
**NOTICE**

It is hereby notified that the undersigned has changed his/her name from **MAHESH** to **MAHESH AMIN**

P.D. 98 **MAHESH**

**REVENUE DEPARTMENT**
**Office of the Deputy Commissioner, Gadag**
**FORM-1**
**(See Rule 9)**
**NOTIFICATION**
**No. EST(2)CR/01/2008-09, Dated: 24th July 2008**

Kumari **JAMELA. TAJUDDEEN. JAMADAR.** Working as Typist in the Office of the Assistant Commissioner, Gadag is permitted to change her name to Smt. **SAHANA APPANNA HANJE.**

**N. SRIRAMAN**
P.D. 99 Deputy Commissioner, Gadag

**IN THE COURT OF THE CITY CIVIL JUDGE, AT BANGALORE [CCH-16]**
**O.S. NO.8940/2007**

BETWEEN
SMT JAGADAMBA V/S ……PLAINTIFF
W/o Mr. V.S.R. Swamy R/at No. 50,
(old No.37) 6th Cross, Swimming pool,
Extension, Malleshwaram, B'lore-560003
NIL …...DEFENDANT

**PUBLIC NOTICE**

This is to inform the general public that Smt. Jagadamba's husband Mr. V.S.R. SWAMY, s/o late Veerasetty, was missing from 04.08.1998 for which, her son had lodged the complaint with the jurisdiction police but, the police have given endorsement dated 25.09.2005 stating that not traced, hence, she had filed suit for declaration that Mr. V.S.R. Swamy as dead the same was Numbered as O.S.No:8940/2007 and the same was disposed off on 16.04.2008 by the City Civil Court, Bangalore (C.C.H-16), the Hon'ble court was pleased to decree the suit and declared that husband of plaintiff Mr. V.S.R. Swamy is dead.

Given under my hand and seal of the Court on this 29th day of July 2008.

By Order of the Court,
P.D. 80 Assistant Registrar,
City Civil Court, Bangalore.

**REVENUE DEPARTMENT**
**STATE TENDER BULLETIN**
**No. RD 83 BHUDASA 2008, Dated: 14th July 2008**

The details of the notices inviting tenders for Request For Proposal (RFP) for Digitisation, scanning and printing of Cadastral survey records in the state of Karnataka is published as a part of the State Tender Bulletin for the second week of July 2008.

**M. VENKATARASAPPA**
State Tender Bulletin Officer and
Deputy Secretary to Govt., Revenue Department,
(Stamps & Registration, Muzrai, Special Cell) Bangalore.

**Commissionerate of Survey, Settlement and Land Records (CSS&LR)**
**K.R. Circle, Bangalore - 560 001**
**No. STR/SCANNING/03/2007-08, Dated: 9th July 2008**
**REQUEST FOR PROPOSAL (RFP) FOR DIGITIZATION, SCANNING & PRINTING OF CADASTRAL SURVEY RECORDS**

Commissionerate of SS&LR invites sealed proposals from agencies interested in taking up **'Digitization, Scanning & Printing of Cadastral Survey Records'** in the State of Karnataka. RFP document containing the detailed scope of work and other terms and conditions can be obtained from the above office from 10/07/2008 to 07/08/2008. The cost of RFP is **Rs.1,000 (Rupees One Thousand only)** payable by cash/demand draft drawn in favour of 'The Commissioner, Commissionerate of Survey, Settlement & Land Records, Government of Karnataka' payable at Bangalore. The pre-bid meeting will be held at the office of CSS & LR on 21.07.2008 at 11 am. The last date for submission of sealed proposals is 08/08/2008.

**Mr. Rudresh K.V.,**
Deputy Director of Land Records,
KR Circle, Bangalore - 560 001
Ph: 080-22272700

**ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ**
**ಕೆ.ಆರ್. ವೃತ್ತ, ಬೆಂಗಳೂರು – 560 001**
**ನಂ: ಉಗ್ರಾಣ ಸ್ಕ್ಯಾನಿಂಗ್ 03/2007–08, ದಿನಾಂಕ: 9ನೇ ಜುಲೈ 2008**
**ಕೆಡಸ್ಟಲ್ ಸರ್ವೆ ಭೂದಾಖಲೆಗಳನ್ನು ಡಿಜಿಟೈಸೇಷನ್, ಸ್ಕ್ಯಾನಿಂಗ್ ಮತ್ತು ಪ್ರಿಂಟಿಂಗ್ ಯೋಜನೆಯ ಆರ್.ಎಫ್.ಪಿ. (Request for proposal) ಅಧಿಸೂಚನೆ**

ಕರ್ನಾಟಕ ರಾಜ್ಯದ ಭೂಮಾಪನಕ್ಕೆ ಸಂಬಂಧಿಸಿದ ಕೆಡಸ್ಟಲ್ ಭೂದಾಖಲೆಗಳ ಡಿಜಿಟೈಸೇಷನ್, ಸ್ಕ್ಯಾನಿಂಗ್ ಮತ್ತು ಪ್ರಿಂಟಿಂಗ್ ಯೋಜನೆಯಲ್ಲಿ ಭಾಗವಹಿಸಲು ಇಚ್ಛಿಸುವ ಸಂಸ್ಥೆಗಳಿಂದ ಮೊಹರು ಮಾಡಿದ ಆರ್.ಎಫ್.ಪಿ ಗಳನ್ನು ಆಹ್ವಾನಿಸಲಾಗಿದೆ. ಸಂಪೂರ್ಣ ವಿವರಗಳನ್ನೊಳಗೊಂಡ ಆರ್.ಎಫ್.ಪಿ ನಮೂನೆಗಳನ್ನು ಮೇಲೆ ನಮೂದಿಸಿದ ಕಛೇರಿಯಿಂದ 10.07.2008 ರಿಂದ 07.08.2008 (ಎರಡು ದಿನಗಳು ಸೇರಿ) ರವರೆಗೆ ಪಡೆಯಬಹುದಾಗಿದೆ. ಆರ್.ಎಫ್.ಪಿ ನಮೂನೆಯ ದರ ರೂ.1000–00 ಗಳನ್ನು (ಒಂದು ಸಾವಿರ ರೂಪಾಯಿಗಳು ಮಾತ್ರ) ಮೇಲ್ಕಾಣಿಸಿದ ವಿಳಾಸದಲ್ಲಿ ನಗದು ಅಥವಾ ಡಿ.ಡಿ. ರೂಪದಲ್ಲಿ ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಕೆ.ಆರ್. ವೃತ್ತ, ಬೆಂಗಳೂರು – 560 001 ರವರಿಗೆ ಪಾವತಿಸುವಂತೆ ಸಲ್ಲಿಸುವುದು. ಪ್ರೀ ಬಿಡ್ ಮೀಟಿಂಗ್‌ನ್ನು ದಿನಾಂಕ: 21.07.2008 ರಂದು ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಕೆ.ಆರ್. ವೃತ್ತ, ಬೆಂಗಳೂರು ರವರ ಕಛೇರಿಯಲ್ಲಿ ಬೆಳಿಗ್ಗೆ 11.00 ಗಂಟೆಗೆ ನಡೆಯಲಿದೆ. ಭರ್ತಿ ಮಾಡಿದ ಆರ್.ಎಫ್.ಪಿ ಗಳನ್ನು ದಿನಾಂಕ: 08.08.2008 ರೊಳಗಾಗಿ ಸಲ್ಲಿಸಬೇಕಾಗಿರುತ್ತದೆ.

**ಕೆ.ವಿ. ರುದ್ರೇಶ್**
ಭೂದಾಖಲೆಗಳ ಉಪ ನಿರ್ದೇಶಕರು,
ಕೆ.ಆರ್. ವೃತ್ತ, ಬೆಂಗಳೂರು–560 001
ದೂರವಾಣಿ : 080–22272700

ಪಿ.ಆರ್. 144

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶನಾಲಯ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಅಂಚೆಪೆಟ್ಟಿಗೆ ಸಂ:7648, ಬೆಂಗಳೂರು–76**

**ಟೆಂಡರ್ ಪ್ರಕಟಣೆ**

**ಸಂ:ತೋಇ:ಜೀವತ:ಸತೋನಿ:ಹುತೋ:28:2007–08, ದಿನಾಂಕ: 25ನೇ ಜುಲೈ 2008**

ಈ ಮೂಲಕ ಸಾರ್ವಜನಿಕರಿಗೆ ಮತ್ತು ಹಣ್ಣಿನ ವ್ಯಾಪಾರಿಗಳಿಗೆ ತಿಳಿಸುವುದೇನೆಂದರೆ, ಬೆಂಗಳೂರು ನಗರ ಜಿಲ್ಲೆಯ ಬೆಂಗಳೂರು ದಕ್ಷಿಣ ತಾಲ್ಲೂಕು ಹುಳಿಮಾವು ತೋಟಗಾರಿಕೆ ಕ್ಷೇತ್ರದಲ್ಲಿ ಬೆಳೆದಿರುವ ಸಪೋಟ ಹಣ್ಣಿನ 2008ನೇ ಸಾಲಿನ ಎರಡನೇ ಅವಧಿಯ ಫಸಲನ್ನು (01.07.2008 ರಿಂದ 31.12.2008) ಅದೇ ಕ್ಷೇತ್ರದಲ್ಲಿ ದಿನಾಂಕ:27.08.2008 ರಂದು ಬೆಳಿಗ್ಗೆ 2.30 ಕ್ಕೆ ಸಾರ್ವಜನಿಕರ ಸಮಕ್ಷಮದಲ್ಲಿ ಟೆಂಡರ್ ಮೂಲಕ ವಿಲೇವಾರಿ ಮಾಡಲಾಗುವುದು.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ ಮತ್ತು ಹರಾಜು ನಡೆಯುವ ಸ್ಥಳ | ವಿಲೇವಾರಿ ಮಾಡುವ ಹಣ್ಣಿನ ಫಸಲು | ಮರಗಳ ಸಂಖ್ಯೆ | ಠೇವಣಿ ಹಣ ರೂ.ಗಳಲ್ಲಿ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ತೆರೆಯುವ ದಿನಾಂಕ ಮತ್ತು ವೇಳೆ |
|---|---|---|---|---|---|---|
| 1 | ಹುಳಿಮಾವು ತೋಟಗಾರಿಕೆ ಕ್ಷೇತ್ರ ಬನ್ನೇರುಘಟ್ಟ ರಸ್ತೆ, ಬೆಂಗಳೂರು–76 | ಸಪೋಟ | 731 | 10,000/– | 27.8.2008 ಮಧ್ಯಾಹ್ನ 1.00 ಗಂಟೆಯವರೆಗೆ | 27.8.2008 ಮಧ್ಯಾಹ್ನ 2.30 ಗಂಟೆಗೆ |

ಟೆಂಡರ್ ಹಾಕುವವರು ಟೆಂಡರ್ ಫಾರಂನ್ನು ರೂ.25–00 ಪಾವತಿ ಮಾಡಿ ಸಹಾಯಕ ತೋಟಗಾರಿಕೆ ನಿರ್ದೇಶಕರು ಕಛೇರಿಯಿಂದ ಪಡೆಯಬೇಕು. ಟೆಂಡರ್‌ದಾರರು ನಿಗದಿಪಡಿಸಿದ ಠೇವಣಿ ಮೊತ್ತ ಮತ್ತು ಫಸಲಿಗೆ ಟೆಂಡರ್‌ದಾರರು ನಮೂದಿಸಿರುವ ಟೆಂಡರ್ ಮೊತ್ತದ ಶೇ.50 ಭಾಗದ ಮೊತ್ತವನ್ನು ಡಿ.ಡಿ.ರೂಪದಲ್ಲಿ ಸಹಾಯಕ ತೋಟಗಾರಿಕೆ ನಿರ್ದೇಶಕರು, ಹುಳಿಮಾವು ಕ್ಷೇತ್ರ (Asst. Director of Horticulture, Hulimavu) ಇವರ ಹೆಸರಿನಲ್ಲಿ ಪಡೆದು ಭರ್ತಿ ಮಾಡಿದ ಟೆಂಡರ್ ಫಾರಂಗೆ ಕಡ್ಡಾಯವಾಗಿ ಲಗತ್ತಿಸಬೇಕು. ಟೆಂಡರ್ ಫಾರಂನಲ್ಲಿ ಹೆಸರು, ವಿಳಾಸ, ಟೆಂಡರ್ ಮೊತ್ತ ಇತ್ಯಾದಿಗಳನ್ನು ಸರಿಯಾಗಿ ದಾಖಲಿಸಬೇಕು. ಇಲ್ಲದಿದ್ದರೆ, ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ತಿರಸ್ಕರಿಸಲಾಗುವುದು. ಭರ್ತಿ ಮಾಡಿದ ಟೆಂಡರ್ ಫಾರಂ ಮತ್ತು ಡಿ.ಡಿ.ಗಳನ್ನು ಮೊಹರಾದ ಲಕೋಟೆಯಲ್ಲಿ ನಿಗದಿತ ದಿನಾಂಕ ಮತ್ತು ವೇಳೆಯೊಳಗೆ ಸಲ್ಲಿಸಬೇಕು.

ಟೆಂಡರ್ ಅನುಮೋದನೆಯಾದ ದಿನಾಂಕದಿಂದ 10 ದಿನಗಳೊಳಗೆ ಪೂರ್ತಿ ಹಣವನ್ನು ಡಿ.ಡಿ. ರೂಪದಲ್ಲಿ ಪಾವತಿಸಿ ಫಸಲನ್ನು 31.12.2008 ರವರೆಗೆ ರೂಢಿಸಿಕೊಳ್ಳಬಹುದು. ಟೆಂಡರ್‌ನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ.

ಹೆಚ್ಚಿನ ವಿವರಗಳನ್ನು ಸಹಾಯಕ ತೋಟಗಾರಿಕೆ ನಿರ್ದೇಶಕರು, ಹುಳಿಮಾವು ಇವರನ್ನು ಸಂಪರ್ಕಿಸಿ ಪಡೆದುಕೊಳ್ಳಬಹುದು.

ಸಹಾಯಕ ತೋಟಗಾರಿಕೆ ನಿರ್ದೇಶಕರು
(ಹುಳಿಮಾವು ತೋಟಗಾರಿಕೆ ಕ್ಷೇತ್ರ)

ಪಿ.ಆರ್. 423

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಕಛೇರಿ, ಚಿಕ್ಕಬಳ್ಳಾಪುರ ಅರಣ್ಯ ವಿಭಾಗ, ಚಿಕ್ಕಬಳ್ಳಾಪುರ**

**ಸಂಕ್ಷಿಪ್ತ ಮಾರಾಟ ಪ್ರಕಟಣೆ**

**ಸಂಖ್ಯೆ:ಎ4/ಎಸ್.ಎ.ಎಸ್/ಹುಣಸೆ/ಸಿಆರ್–44/2008–09, ದಿನಾಂಕ: ಜುಲೈ 2008**

ಚಿಕ್ಕಬಳ್ಳಾಪುರ ವಿಭಾಗದ ಅರಣ್ಯ ಗುತ್ತಿಗೆದಾರರಿಗೆ ತಿಳಿಯಪಡಿಸುವುದೇನೆಂದರೆ, ಚಿಕ್ಕಬಳ್ಳಾಪುರ ಅರಣ್ಯ ವಿಭಾಗದ ವಿವಿಧ ತಾಲ್ಲೂಕಿನ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮಕ್ಕೆ ಹಸ್ತಾಂತರಿಸಿ ಉಳಿದಿರುವ ಈ ಕೆಳಗೆ ಕಾಣಿಸಿದ ತಾಲ್ಲೂಕು ಅರಣ್ಯ ಪ್ರದೇಶದಲ್ಲಿರುವ ಹುಣಸೆ ಫಸಲಿನ ಗುತ್ತಿಗೆ ಮಾರಾಟವನ್ನು ದೃಢೀಕರಿಸಿದ ದಿನಾಂಕದಿಂದ 30.06.2009ರವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿಕ್ಕಬಳ್ಳಾಪುರ ಅಥವಾ ಅವರಿಂದ ನೇಮಿಸಲ್ಪಟ್ಟ ಇತರೆ ಅಧಿಕಾರಿಗಳಿಂದ ಟೆಂಡರ್–ಕಂ–ಹರಾಜನ್ನು ದಿನಾಂಕ:14.08.2008 ರಂದು ಅಪರಾಹ್ನ 3.00 ಗಂಟೆಗೆ ಮಾಡಲಾಗುವುದು. ಟೆಂಡರ್ ಫಾರಂಗಳನ್ನು ದಿನಾಂಕ: 12.08.2008 ರಂದು ಮತ್ತು 13.08.2008 ರಂದು ಸಂಜೆ 5.30 ಗಂಟೆಯವರೆಗೆ ಕೊಡಲಾಗುವುದು. ಪ್ರತಿ ಟೆಂಡರ್ ಫಾರಂನ ಬೆಲೆ ರೂ. 241.00 (ತೆರಿಗೆ ಸೇರಿ) (ಇನ್ನೂರ ನಲವತ್ತೊಂದು ರೂಪಾಯಿ)ಗಳ ಮೇಲ್ಕಂಡ ದಿನಾಂಕಗಳಂದು ಟೆಂಡರ್–ಕಂ–ಹರಾಜು ಕಾರಣಾಂತರದಿಂದ ನಡೆಯದಿದ್ದಲ್ಲಿ ಇದೇ ಪ್ರಕಟಣೆಯ ಷರತ್ತುಗೊಳಪಟ್ಟು ದಿನಾಂಕ: 21.08.2008 ಮತ್ತು 30.08.2008 ರಂದು ಹರಾಜು ಮಾಡಲಾಗುವುದು. ಇದಕ್ಕೆ ಪ್ರತ್ಯೇಕ ಪ್ರಕಟಣೆ ಹೊರಡಿಸುವುದಿಲ್ಲ. ಹೆಚ್ಚಿನ ವಿವರಗಳಿಗೆ ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸುವುದು.

**2008–09ನೇ ಸಾಲಿನ ಅರಣ್ಯ ಪ್ರದೇಶದ ಹುಣಸೆ ಫಸಲು ಗುತ್ತಿಗೆ ಮಾರಾಟ**
**(ಒಂದು ವರ್ಷದ ಅವಧಿಗೆ ಮಾತ್ರ)**

| | | | |
|---|---|---|---|
| 1. | ಚಿಂತಾಮಣಿ | 1. | ಚಿಂತಾಮಣಿ ತಾಲ್ಲೂಕು, ಅರಣ್ಯ ಕೋನಪಲ್ಲಿ ಹುಣಸೆ ನೆಡುತೋಪು. |
| 2. | ಚಿಕ್ಕಬಳ್ಳಾಪುರ | 2. | ಎನ್.ಡಿ.ಬಿ.–1 ರಿಂದ 4ನೇ ಬ್ಲಾಕ್‌ವರೆಗೆ |
| | | 3. | ಕೆ.ಎಸ್.ಗಿಡ ಮತ್ತು ಸೂಲಾಲಪ್ಪನ ದಿನ್ನೆ ಹುಣಸೆ ನೆಡುತೋಪು. |
| 3. | ಬಾಗೇಪಲ್ಲಿ | 4. | ಇಟಕಲ್ ದುರ್ಗ ಸ್ಟೇಟ್ ಫಾರೆಸ್ಟ್ ಹುಣಸೆ ನೆಡುತೋಪು ಬ್ಲಾಕ್–1 ರಿಂದ 4 ರವರೆಗೆ |
| | | 5. | ಯಲ್ಲಂಪಲ್ಲಿ ಹುಣಸೆ ನೆಡುತೋಪು |
| | | 6. | ವಂಡಮಾನ್ ಅರಣ್ಯ ಪ್ರದೇಶ |
| 4. | ಗೌರಿಬಿದನೂರು | 7. | ಕುರೂಡಿ ಮತ್ತು ಎಮ್ಮೇಗುಡ್ಡ ನೆಡುತೋಪು |
| | | 8. | ಗೆದರೆ ನೆಡುತೋಪು. |
| | | 9. | ವಲಸೆಬೆಟ್ಟ ನೆಡುತೋಪು |
| | | 10. | ಗೌರೀಬಿದನೂರು ತಾಲ್ಲೂಕು ನೆಡುತೋಪು. |
| 5. | ಗುಡಿಬಂಡೆ | 11. | ಬೀಚಗನಹಳ್ಳಿ ಮತ್ತು ಜೂಬ್ಲಿಗಾರ್ಡನ್ |
| | | 12. | ಗುಡಿಬಂಡೆ ತಾಲ್ಲೂಕು ಅರಣ್ಯ (ಎನ್.ಡಿ.ಬಿ.5ನೇ) ಬ್ಲಾಕ್ ಯೂನಿಟ್ 15ನ್ನು ಹೊರತುಪಡಿಸಿ). |
| 6. | ಶಿಡ್ಲಘಟ್ಟ | 13. | ಶಿಡ್ಲಘಟ್ಟ ತಾಲ್ಲೂಕು ಅರಣ್ಯ (ಯೂನಿಟ್–12 ಮತ್ತು 13ನ್ನು ಹೊರತುಪಡಿಸಿ) |
| | | 14. | ದೊಡ್ಡಹರಡಿ ಚಿಕ್ಕಹರಡಿ ಪ್ಲಾಂಟೇಶನ್ |
| | | 15. | ಚೌಡಸಂದ್ರ ಮತ್ತು ಹಿತ್ತಲಹಳ್ಳಿ |

**2008–09ನೇ ಸಾಲಿನ ರಸ್ತೆ ಬದಿ ಹುಣಸೆ ಫಸಲು ಗುತ್ತಿಗೆ ಮಾರಾಟ**
**(ಪ್ರತ್ಯೇಕವಾಗಿ ರಸ್ತೆವಾರು ವಿಲೇವಾರಿ ಮಾಡಲಾಗುವುದು) (ಒಂದು ವರ್ಷದ ಅವಧಿಗೆ ಮಾತ್ರ)**

1. ಚಿಕ್ಕಬಳ್ಳಾಪುರ ತಾಲ್ಲೂಕು ರಸ್ತೆ ಬದಿ
2. ಬಾಗೇಪಲ್ಲಿ ತಾಲ್ಲೂಕು ರಸ್ತೆ ಬದಿ
3. ಗುಡಿಬಂಡೆ ತಾಲ್ಲೂಕು ರಸ್ತೆ ಬದಿ
4. ಚಿಂತಾಮಣಿ ತಾಲ್ಲೂಕು ರಸ್ತೆ ಬದಿ
5. ಶಿಡ್ಲಘಟ್ಟ ತಾಲ್ಲೂಕು ರಸ್ತೆ ಬದಿ
6. ಗೌರೀಬಿದನೂರು ತಾಲ್ಲೂಕು ರಸ್ತೆ

**2008–09ನೇ ಸಾಲಿನ ಸಿಟ್ರಿಡೋರಾ ಫಸಲು ಗುತ್ತಿಗೆ ಮಾರಾಟ**
**(ಒಂದು ವರ್ಷದ ಅವಧಿಗೆ ಮಾತ್ರ)**

| | | | |
|---|---|---|---|
| 1. | ಚಿಕ್ಕಬಳ್ಳಾಪುರ | 1. | ಆವಲಹಳ್ಳಿ |
| | | 2. | ಹರಿಸ್ಥಳ ಸ್ಟೇಟ್ ಫಾರೆಸ್ಟ್ |
| | | 3. | ಕೇತೇನಹಳ್ಳಿ ಸ್ಟೇಟ್ ಫಾರೆಸ್ಟ್ |
| | | 4. | ನಂದಿಬೆಟ್ಟ ಸ್ಟೇಟ್ ಫಾರೆಸ್ಟ್ |
| | | 5. | ಕಂಡಕನಹಳ್ಳಿ |
| 2. | ಶಿಡ್ಲಘಟ್ಟ | 6. | ಚಿಂತಿಡಿಪಿ |
| | | 7. | ಅಜ್ಜಕದಿರೇನಹಳ್ಳಿ |
| | | 8. | ಪಲಿಚೆರ್ಲು ಬೀಟ್ |
| | | 9. | ತಲಕಾಯಲಬೆಟ್ಟ ಬೀಟ್ |
| | | 10. | ಜಿ.ಜಿ. ಹಳ್ಳಿ |
| | | 11. | ದೊಡ್ಡಹರಡಿ ಬೀಟ್ |
| 3. | ಗುಡಿಬಂಡೆ ತಾಲ್ಲೂಕು | 12. | ಕನ್ನಮಂಗಲ |
| | | 13. | ಎಲ್ಲೋಡು ಅರಣ್ಯ |
| 4. | ಬಾಗೇಪಲ್ಲಿ ತಾಲ್ಲೂಕು | 14. | ಎನ್.ಡಿ.ಬಿ–5ನೇ ಬ್ಲಾಕ್ |
| 5. | ಚಿಂತಾಮಣಿ ತಾಲ್ಲೂಕು | | |
| 6. | ಗೌರೀಬಿದನೂರು ತಾಲ್ಲೂಕು | | |

**2007–08ನೇ ಸಾಲಿನ ತೂಪ್ರ ಎಲೆ ಗುತ್ತಿಗೆ ಮಾರಾಟ**

**(ಒಂದು ವರ್ಷದ ಅವಧಿಗೆ ಮಾತ್ರ)**

1. ಗೌರೀಬಿದನೂರು ತಾಲ್ಲೂಕು
2. ಬಾಗೇಪಲ್ಲಿ ತಾಲ್ಲೂಕು
3. ಶಿಡ್ಲಘಟ್ಟ ತಾಲ್ಲೂಕು
4. ಚಿಂತಾಮಣಿ ತಾಲ್ಲೂಕು
5. ಚಿಕ್ಕಬಳ್ಳಾಪುರ ತಾಲ್ಲೂಕು
6. ಗುಡಿಬಂಡೆ ತಾಲ್ಲೂಕು

**2008–09ನೇ ಸಾಲಿನ ಎಂ.ಎಫ್.ಪಿ. ಗುತ್ತಿಗೆ ಮಾರಾಟ**

**(ಒಂದು ವರ್ಷದ ಅವಧಿಗೆ ಮಾತ್ರ)**

1. ಗೌರೀಬಿದನೂರು ತಾಲ್ಲೂಕು
2. ಬಾಗೇಪಲ್ಲಿ ತಾಲ್ಲೂಕು
3. ಶಿಡ್ಲಘಟ್ಟ ತಾಲ್ಲೂಕು
4. ಚಿಂತಾಮಣಿ ತಾಲ್ಲೂಕು
5. ಚಿಕ್ಕಬಳ್ಳಾಪುರ ತಾಲ್ಲೂಕು
6. ಗುಡಿಬಂಡೆ ತಾಲ್ಲೂಕು

**ಷರತ್ತುಗಳು:**

1. ಇ.ಎಂ.ಡಿ. ಯನ್ನು ಪ್ರತಿ ಘಟಕಕ್ಕೆ ರೂ.5000–00 ರಂತೆ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ ಡಿ.ಡಿ. ರೂಪದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು, ಚಿಕ್ಕಬಳ್ಳಾಪುರ ರವರ ಪರ ತೆಗೆದು ಸಲ್ಲಿಸಬೇಕು.
2. ಚಿಕ್ಕಬಳ್ಳಾಪುರ ವಿಭಾಗದಲ್ಲಿ 2008–09ನೇ ಸಾಲಿಗೆ ಅರಣ್ಯ ಗುತ್ತಿಗೆದಾರರಾಗಿ ನೊಂದಾಯಿಸಿರುವವರು ಮತ್ತು ಸಾರ್ವಜನಿಕರು ಟೆಂಡರ್ ಮತ್ತು ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
3. ಟೆಂಡರ್ ಫಾರಂಗಳನ್ನು ದಿನಾಂಕ: 12.08.2008 ಮತ್ತು 13.08.2008 ರಂದು ಕೆಲಸದ ವೇಳೆಯಲ್ಲಿ ಕೊಡಲಾಗುವುದು. ಒಂದು ಟೆಂಡರ್ ಫಾರಂ ಬೆಲೆ ರೂ.241–00 (ತೆರಿಗೆ ಎಲ್ಲಾ ಸೇರಿ) ಮತ್ತು ಮರು ಹರಾಜು ಟೆಂಡರ್ ಫಾರಂ ದಿನಾಂಕ: 20.08.2008 ಮತ್ತು 29.08.2008 ರಂದು ಟೆಂಡರ್ ಫಾರಂ ನೀಡುವುದು.
4. ಮೇಲ್ಕಂಡ ಮಾರಾಟದ ಒಪ್ಪಿಗೆ ಮತ್ತು ನಿರಾಕರಿಸುವುದು ಅರಣ್ಯ ಇಲಾಖಾ ಪ್ರಾಧಿಕಾರವುಳ್ಳ ಅಧಿಕಾರಿಗಳವರ ವ್ಯಾಪ್ತಿಯಲ್ಲಿರುತ್ತದೆ.
5. ಮೊಹರಾದ ಟೆಂಡರ್ ನಮೂನೆಗಳನ್ನು ದಿನಾಂಕ: 14.08.2008 ರಂದು ಮಧ್ಯಾಹ್ನ 1.00 ಗಂಟೆವರೆಗೆ ಸಲ್ಲಿಸಬಹುದು.
6. ಹೆಚ್ಚಿಗೆ ದರವನ್ನು ಬಿಡ್‌ನಲ್ಲಿ ಕೊಟ್ಟಿರುವವರು 50 ರಷ್ಟು ಹಣವನ್ನು ಮತ್ತು ಎಲ್ಲಾ ತೆರಿಗೆಗಳನ್ನು ಮಾರಾಟ ಮುಗಿದ ತಕ್ಷಣ ಪಾವತಿಸಬೇಕು. ಇಲ್ಲದಿದ್ದರೆ ಅದರ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳುವುದಲ್ಲದೆ ಆ ಯೂನಿಟ್‌ನ್ನು ಅವರ ಜವಾಬ್ದಾರಿಯಲ್ಲಿ ಮರು ಹರಾಜು ಮಾಡಲಾಗುವುದು.
7. ಕರಾರು ಪತ್ರ ಮಾಡುವ ಸಮಯದಲ್ಲಿ ಬಾಕಿ ಉಳಿದ ಪೂರ್ತಿ ಹಣವನ್ನು ಪಾವತಿಸಬೇಕು.
8. ಕಪ್ಪು ಪಟ್ಟಿಗೆ ಸೇರಿರುವವರು, ಎನ್‌ಸಾಲ್‌ವೆಂಟ್ಸ್, ಡಿಫಾಲ್ಟರ್ಸ್ ಮತ್ತು ಮೈನರ್ಸ್ ಟೆಂಡರ್ ಸಲ್ಲಿಸುವುದಕ್ಕಾಗಲೀ ಬಿಡ್‌ನಲ್ಲಿ ಭಾಗವಹಿಸುವುದಕ್ಕಾಗಲೀ ಅರ್ಹರಲ್ಲ.
9. ಉಳಿದ ವಿವರಗಳು ಮತ್ತು ಷರತ್ತುಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿಕ್ಕಬಳ್ಳಾಪುರ ರವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ.

ಪಿ.ಆರ್. 424

**KARNATAKA ADMINISTRATIVE TRIBUNAL AT BANGALORE**

**B.D.A. Complex, Indiranagar, Bangalore**

**NOTIFICATION**

**No. KAT/EST(1)/RECT-STN/43/2007, Dated: 28th July 2008**

The following candidates are selected for appointment to the post of stenographers in Karnataka Administrative Tribunal in the order mentioned below.

| Sl. No. | Name of the Candidates<br>Smt./Kum/Sri | Category |
|---|---|---|
| 1. | Mangala Jyothi D.<br>D/o Doreppa, Dyavappana Koppalu,<br>Opp. M.C.E., Salagame Road, Hassan-573 201. | GM (Others)<br>(79.93%) |
| 2. | Deepa S.P.<br>D/o Prahallada Rao S.,<br>No.70, Sri Rama Nilaya, 4th Cross, Aryappa Reddy Thota,<br>LIC Colony, Yeshwanthapura, Bangalore-560 022. | GM (Woman)<br>(79.38%) |
| 3. | Iranna Bhorawat,<br>S/o Bhimanagouda Bhorawat,<br>At & Post: Korawara, Sindhagi Taluk,<br>Bijapur Dist: 586 120. | GM (Rural)<br>(64.07%) |
| 4. | Sevanthi R.<br>D/o Ramachandra R.<br>No.1642/B, Nimishambha Nilaya,<br>4th Cross, Hosakeri, K.R. Mohalla, Mysore-570 024. | ST (Others)<br>(62.88%) |
| 5. | Murali Babu M.V.,<br>S/o Venkatesh Babu M., Bale Beedhi,<br>Kataripalya, Kolar-563 101. | Category-2A<br>(Others)<br>(62.30%) |
| 6. | Pavithra M.<br>W/o Parameshwara, Ananda Nilaya<br>(House of Sri Deepak Rangaswamy)<br>I floor, 3rd Main Road, Saraswathipuram, Hassan-573 201. | SC (Others)<br>(62.03%) |
| 7. | Biligajja,<br>S/o Kariyappa, Ayitholu, Iyyanahalli Post,<br>Chitradurga Taluk & District. | Category-I<br>(Others)<br>(57.44%) |

By Order of the Selection Committee
Secretary,
Selection Committee

P.R. 425

**ಅಧಿಕೃತ ಅಧಿಕಾರಿಗಳು ಹಾಗೂ, ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್‌ರವರ ಕಛೇರಿ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು**

**ಹರಾಜು ಪ್ರಕಟಣೆ**

**ನಂ. ಎಸ್‌ಡಿಕೆ/ಹರಾಜು/1/2008–09, ದಿನಾಂಕ: 26ನೇ ಜುಲೈ 2008**

**ವಿಷಯ:** ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಅಡಿಯಲ್ಲಿ ಅಕ್ರಮವಾಗಿ ಅಬಕಾರಿ ವಸ್ತುಗಳನ್ನು ಸಾಗಾಣಿಕೆಗೆ ಬಳಸಿದ ಈ ಕೆಳಕಂಡ ವಾಹನವನ್ನು ಅಬಕಾರಿ ಕಾಯ್ದೆ 1965ರ ಕಲಂ 43A ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದ್ದು, ಸದ್ರಿ ವಾಹನವನ್ನು ಈ ಕೆಳಕಂಡ ದಿನದಂದು ಅಬಕಾರಿ ಉಪ ಅಧೀಕ್ಷಕರ ಕಛೇರಿ, ಪುತ್ತೂರು ಉಪ ವಿಭಾಗ ಇಲ್ಲಿ ವಾಹನವು ಇರುವ ಸ್ಥಿತಿ ಗತಿಯಲ್ಲಿ ಬಹಿರಂಗ ಹರಾಜು ಮಾಡಲು ಈ ಮೂಲಕ ಪ್ರಕಟಣೆ ಹೊರಡಿಸಲಾಗಿದೆ.

| ಕ್ರ. ಸಂ. | ಅಬಕಾರಿ ಮೊಕದ್ದಮೆ ಸಂ: ಹಾಗೂ ದಿನಾಂಕ | ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಆದೇಶ ಸಂ: ಮತ್ತು ದಿನಾಂಕ | ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ವಾಹನಗಳ ವಿವರ | ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರ ವೀಕ್ಷಣೆಗೆ ವಾಹನ ಲಭ್ಯವಿರುವ ಸ್ಥಳದ ವಿವರ | ಹರಾಜಿನ ದಿನಾಂಕ ಮತ್ತು ಸಮಯ |
|---|---|---|---|---|---|
| 1 | ಪೊ.ಉ.ನಿ/ಪುತ್ತೂರು ಗ್ರಾನಗರ ಪೊ.ಠಾಣೆ ಕ್ರೈಂ ಸಂ: ಸಂ:143/2007, ದಿ:9.10.2007 | ಇಐಬಿ/ಡಿಟಿಸಿಆರ್/ 190/2007–08, ದಿ:29.3.08 | ಮಾರುತಿ ಒಮಿನಿ ಕಾರು ನಂಬರ್ ಪ್ಲೇಟು ಇಲ್ಲದ (KA-19P-2467) ಎಂದು ತನಿಖೆಯಿಂದ ತಿಳಿದುಬಂದಿರುತ್ತದೆ) | ಅ.ಉ.ನಿ (2) ಪುತ್ತೂರು ವಲಯ–ಪುತ್ತೂರು ವಲಯ ಕಛೇರಿ ಆವರಣ | ದಿ:12.8.08 ಸಮಯ: 11.30 |

ಮೇಲಿನ ವಾಹನವನ್ನು ಹರಾಜು ನಿರ್ವಹಣೆಯನ್ನು ಜರುಗಿಸಲು ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ ಇವರನ್ನು ಹರಾಜು ನಿರ್ವಹಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ಹರಾಜು ಮೂಲಕ ವಾಹನಗಳನ್ನು ಪಡೆಯಲು ಇಚ್ಛಿಸುವ ಸಾರ್ವಜನಿಕರು ಹರಾಜು ಷರತ್ತುಗಳನ್ನು ಅನುಸರಿಸಿ ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.

**ಷರತ್ತುಗಳು**

1) ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಸವಾಲುದಾರರು ವಾಹನಕ್ಕೆ ರೂ.5,000/– ಮುಂಗಡ ಠೇವಣಿಯನ್ನು ಹರಾಜು ನಡೆಯುವ ಸ್ಥಳದಲ್ಲಿ ಹರಾಜಿನ ದಿನಾಂಕದಂದು ತೆರೆಯುವ ಕೌಂಟರಿನಲ್ಲಿ ಪಾವತಿ ಮಾಡುವುದು. ಮುಂಗಡ ಠೇವಣಿ ಹಣವನ್ನು ಹರಾಜು ನಡೆಯುವ ಸ್ಥಳದಲ್ಲಿ ಹರಾಜಿನ ದಿನದಂದು ಬೆಳಿಗ್ಗೆ 9:30 ಗಂಟೆಯಿಂದ 11:00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಮುಂಗಡ ಠೇವಣಿ ಪಾವತಿಸದವರು ಹರಾಜಿನಲ್ಲಿ ಭಾಗವಹಿಸಲು ಅನರ್ಹರಾಗುತ್ತಾರೆ.

2) ಯಶಸ್ವಿ ಸವಾಲುದಾರರ ಮುಂಗಡ ಠೇವಣಿಯನ್ನು ಸವಾಲು ಹಣಕ್ಕೆ ಹೊಂದಾಣಿಕೆ ಮಾಡಿಕೊಳ್ಳಲಾಗುವುದು. ಯಶಸ್ವಿಯಾಗದವರ ಠೇವಣಿ ಹಣವನ್ನು ಹರಾಜು ಮುಗಿದ ತಕ್ಷಣ ಹಿಂದಿರುಗಿಸಲಾಗುವುದು.

3) ಸವಾಲು ಸ್ವೀಕೃತವಾದಲ್ಲಿ ತಾತ್ಕಾಲಿಕವಾಗಿ ಅಂಗೀಕರಿಸಿದ ಸವಾಲು ಮೊತ್ತದ ಶೇಕಡಾ 25 ರಷ್ಟು ಮೌಲ್ಯವನ್ನು ಯಶಸ್ವಿ ಸವಾಲುದಾರರು ಹರಾಜಿನ ದಿನವೇ ಸರ್ಕಾರಕ್ಕೆ ಪಾವತಿಸತಕ್ಕದ್ದು. ತಪ್ಪಿದಲ್ಲಿ ಮುಂಗಡ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಯಶಸ್ವಿ ಸವಾಲುದಾರರು ಸವಾಲು ನೀಡಿರುವ ವಾಹನವನ್ನು ಮರುಹರಾಜಿಗೆ ಇಡಲಾಗುವುದು.

4) ಯಶಸ್ವಿ ಸವಾಲುದಾರರು ಸವಾಲಿನ ಪೂರ್ಣ ಮೊತ್ತವನ್ನು ಹರಾಜು ಸ್ಥಿರೀಕರಣವಾದ ದಿನಾಂಕದಿಂದ 7 ದಿವಸಗಳೊಳಗೆ ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು. ತಪ್ಪಿದಲ್ಲಿ ಸದ್ರಿಯವರು ಸವಾಲು ಬಾಬ್ತು ಪಾವತಿಸಿದ ಶೇಕಡಾ 25 ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಯಶಸ್ವಿ ಸವಾಲುದಾರರು ಅಂಗೀಕರಿಸಲಾಗುವ ಸವಾಲಿನ ಪೂರ್ಣ ಮೊತ್ತ ಹಾಗೂ ಮಾರಾಟ ತೆರಿಗೆ ಪಾವತಿಸಿದ ನಂತರವೇ ವಾಹನವನ್ನು ಅವರ ಸುಪರ್ಧಿಗೆ ನೀಡಲಾಗುವುದು.

5) ಯಶಸ್ವಿ ಸವಾಲುದಾರರು ಮಾರಾಟ ತೆರಿಗೆ ಹಾಗೂ ಇತರ ಸೆಸ್‌ಗಳನ್ನು ಚಾಲ್ತಿ ದರದಲ್ಲಿ ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು.

6) ಯಶಸ್ವಿ ಸವಾಲುದಾರರು ಹರಾಜಿನ ಸ್ಥಳದಿಂದ ವಾಹನವನ್ನು ಸಾಗಿಸಲು ತಾವೇ ಸೂಕ್ತ ವ್ಯವಸ್ಥೆಯನ್ನು ಮಾಡಿಕೊಳ್ಳತಕ್ಕದ್ದು.

7) ಯಶಸ್ವಿ ಸವಾಲುದಾರರು ವಾಹನದ ಮಾಲೀಕತ್ವವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯಿಂದ ತಮ್ಮ ಹೆಸರಿಗೆ ತಮ್ಮ ವೆಚ್ಚದಲ್ಲಿಯೇ ಬದಲಾವಣೆ ಮಾಡಿಸಿಕೊಳ್ಳತಕ್ಕದ್ದು.

8) ಇಲಾಖೆಯ ಅಧಿಕಾರಿಗಳು ಹಾಗೂ ಸಿಬ್ಬಂದಿಯವರು ಹರಾಜಿನಲ್ಲಿ ಭಾಗವಹಿಸುವುದು ನಿರ್ಬಂಧಿಸಿದೆ.

9) ವಾಹನವನ್ನು ಪರೀಕ್ಷಿಸಲು ಇಚ್ಛಿಸುವವರು ಹರಾಜು ಸ್ಥಳದಲ್ಲಿ ಹರಾಜು ನಡೆಯುವ ಪೂರ್ವದಲ್ಲಿ ಹಾಗೂ ಹರಾಜು ದಿನಾಂಕದಂದು ವಾಹನವನ್ನು ಪರಿಶೀಲಿಸಬಹುದಾಗಿರುತ್ತದೆ.

10)ಹರಾಜು ನಿರ್ವಹಣಾಧಿಕಾರಿಗಳ ತೀರ್ಮಾನವೇ ಅಂತಿಮವಾಗಿದ್ದು, ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಸ್ಥಿರೀಕರಣಕ್ಕೆ ಒಳಪಟ್ಟಿರುತ್ತದೆ.

ಅಧಿಕೃತ ಅಧಿಕಾರಿಗಳು ಹಾಗೂ,
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ, ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್‌ರವರ ಕಛೇರಿ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು**

**ಹರಾಜು ಪ್ರಕಟಣೆ**

**ನಂ. ಎಸ್‌ಡಿಕೆ/ಹರಾಜು/1/2008–09, ದಿನಾಂಕ: 26ನೇ ಜುಲೈ 2008**

**ವಿಷಯ:** ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಅಡಿಯಲ್ಲಿ ಅಕ್ರಮವಾಗಿ ಅಬಕಾರಿ ವಸ್ತುಗಳನ್ನು ಸಾಗಾಣಿಕೆಗೆ ಬಳಸಿದ ಈ ಕೆಳಕಂಡ ವಾಹನವನ್ನು ಅಬಕಾರಿ ಕಾಯ್ದೆ 1965ರ ಕಲಂ 43A ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದ್ದು, ಸದ್ರಿ ವಾಹನವನ್ನು ಈ ಕೆಳಕಂಡ ದಿನದಂದು ಅಬಕಾರಿ ಉಪ ಅಧೀಕ್ಷಕರ ಕಛೇರಿ, ಬಂಟ್ವಾಳ ಉಪ ವಿಭಾಗ ಇಲ್ಲಿ ವಾಹನವು ಇರುವ ಸ್ಥಿತಿ ಗತಿಯಲ್ಲಿ ಬಹಿರಂಗ ಹರಾಜು ಮಾಡಲು ಈ ಮೂಲಕ ಪ್ರಕಟಣೆ ಹೊರಡಿಸಲಾಗಿದೆ.

